

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 1825 (2185)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು: ಯುವ ಸಬಲೀಕರಣ ಮತ್ತು ಕ್ರೀಡೆ ಹಾಗೂ ಯೋಜನಾ ಸಚಿವರು

ವಿಷಯ : ಶಾಸಕರ ಪ್ರದೇಶಾಭಿವೃದ್ಧಿ ನಿಧಿಯಡಿ ಅನುಮೋದನೆ ದೊರೆತು ಕಾಮಗಾರಿ ಆರಂಭವಾಗದಿರುವ ಬಗ್ಗೆ

(ಅ) ಶಾಸಕರ ಪ್ರದೇಶಾಭಿವೃದ್ಧಿ ನಿಧಿಯಡಿಯಲ್ಲಿ ಕ್ರಿಯಾ ಯೋಜನೆ ಸಲ್ಲಿಸಿ ಜಿಲ್ಲಾಧಿಕಾರಿಗಳಿಂದ ಆಡಳಿತಾತ್ಮಕ ಅನುಮೋದನೆ ದೊರೆತ ಮೇಲೂ ರಾಜ್ಯದಲ್ಲಿ ಸುಮಾರು 12000ಕ್ಕೂ ಅಧಿಕ ಕಾಮಗಾರಿಗಳು ಇನ್ನೂ ಪ್ರಾರಂಭವಾಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಆಡಳಿತಾತ್ಮಕ ಅನುಮೋದನೆ ದೊರೆತರೂ ಕಾಮಗಾರಿ ಆರಂಭವಾಗದಿರಲು ಕಾರಣವೇನು ;

(ಇ) ಕಳೆದ ಎರಡು ವರ್ಷಗಳಲ್ಲಿ ಶಾಸಕರ ಪ್ರದೇಶಾಭಿವೃದ್ಧಿ ನಿಧಿಯಡಿ ರಾಜ್ಯದಲ್ಲಿ ಬಿಡುಗಡೆಗೊಂಡ ಅನುದಾನ/ಖರ್ಚಾದ ಅನುದಾನ ಹಾಗೂ ಬಾಕಿ ಉಳಿದಿರುವ ಅನುದಾನವೆಷ್ಟು ; (ಮಾಹಿತಿ ನೀಡುವುದು)

(ಈ) ಬೆಳಗಾವಿ ಜಿಲ್ಲೆಗೆ ಕಳೆದ ಎರಡು ವರ್ಷಗಳ ಅವಧಿಯಲ್ಲಿ ಶಾಸಕರ ಪ್ರದೇಶಾಭಿವೃದ್ಧಿ ನಿಧಿಯಡಿ ಬಿಡುಗಡೆಗೊಂಡ ಅನುದಾನ/ಖರ್ಚಾದ ಅನುದಾನ ಹಾಗೂ ಬಾಕಿ ಉಳಿದಿರುವ ಅನುದಾನದ ಬಗ್ಗೆ ಮಾಹಿತಿ ನೀಡುವುದು ;

(ಉ) ಬೆಳಗಾವಿ ಜಿಲ್ಲೆಯಲ್ಲಿ ಕಳೆದ ಎರಡು ವರ್ಷಗಳಲ್ಲಿ ಶಾಸಕರ ಪ್ರದೇಶಾಭಿವೃದ್ಧಿ ನಿಧಿಯಡಿ ಕ್ರಿಯಾ ಯೋಜನೆ ಸಲ್ಲಿಸಿ, ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡರೂ ಇನ್ನೂ ಪ್ರಾರಂಭವಾಗದ ಕಾಮಗಾರಿಗಳು ಯಾವುವು ? (ಮಾಹಿತಿ ನೀಡುವುದು)